

# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಸಂಖ್ಯೆ : 277
ಸದಸ್ಯರ ಹೆಸರು : ಶ್ರೀ. ಮರಿತಿಬ್ಬೇಗೌಡ (ಶಿಕ್ಷಕರ ಕ್ಷೇತ್ರ)
ಉತ್ತರಿಸಬೇಕಾದ ದಿನಾಂಕ : 17-02-2022.
ಉತ್ತರಿಸುವ ಸಚಿವರು : ಮಾನ್ಯ ಮುಖ್ಯಮಂತ್ರಿಗಳು.

| ಕ್ರ.ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ. | ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ ಯಡಿಯಲ್ಲಿ ನಡೆಸಲಾಗುತ್ತಿರುವ ಪ್ರಾಥಮಿಕ, ಪ್ರೌಢ, ಪದವಿ ಪೂರ್ವ ಹಾಗೂ ಪದವಿ ಕಾಲೇಜುಗಳ ಸಂಖ್ಯೆ ಎಷ್ಟು; (ಪ್ರತ್ಯೇಕವಾಗಿ ವಿವರ ನೀಡುವುದು) | ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯಡಿಯಲ್ಲಿ 100 ಮೊರಾರ್ಜಿ ದೇಸಾಯಿ ವಸತಿ ಶಾಲೆಗಳು, 05 ಸರ್ಕಾರಿ ಮುಸ್ಲಿಂ ವಸತಿ ಶಾಲೆಗಳು, 08 ಅಲ್ಪಸಂಖ್ಯಾತರ ಮಾದರಿ ವಸತಿ ಶಾಲೆ (ನವೋದಯ)ಗಳು ಹಾಗೂ 21 ಮೊರಾರ್ಜಿ ದೇಸಾಯಿ ಪದವಿ ಪೂರ್ವ ಬಾಲಕಿಯರ ವಸತಿ ಕಾಲೇಜುಗಳು ವಸತಿ ಸಹಿತವಾಗಿ ಮತ್ತು 200 ಮೌಲಾನಾ ಆಜಾದ್ ಮಾದರಿ ಶಾಲೆಗಳು ವಸತಿ ರಹಿತವಾಗಿ ಕಾರ್ಯ ನಿರ್ವಹಿಸುತ್ತಿವೆ. ಸದರಿ ಶಾಲಾ/ಕಾಲೇಜುಗಳ ಮಾಹಿತಿಯನ್ನು ಈ ಕೆಳಗಿನ ಪಟ್ಟಿಯಲ್ಲಿ ನೀಡಿದೆ. |

| ಕ್ರ.ಸಂ | ಶಾಲೆಗಳ ವಿಧ | ಒಟ್ಟು | ನಡೆಸಲಾಗುತ್ತಿರುವ ತರಗತಿಗಳು |
|---|---|---|---|
| 1 | ಮೊರಾರ್ಜಿ ದೇಸಾಯಿ ವಸತಿ ಶಾಲೆಗಳು. | 100 | 6 ರಿಂದ 10ನೇ ತರಗತಿ |
| 2 | ಸರ್ಕಾರಿ ಮುಸ್ಲಿಂ ವಸತಿ ಶಾಲೆಗಳು. | 5 | 6 ರಿಂದ 10ನೇ ತರಗತಿ |
| 3 | ಅಲ್ಪಸಂಖ್ಯಾತರ ಮಾದರಿ ವಸತಿ ಶಾಲೆಗಳು (ನವೋದಯ). | 8 | 6 ರಿಂದ 12ನೇ ತರಗತಿ (1ನೇ & 2ನೇ ಪಿಯುಸಿ) |
| 4 | ಮೌಲಾನಾ ಆಜಾದ್ ಮಾದರಿ ಶಾಲೆಗಳು | 200 | 6 ರಿಂದ 10ನೇ ತರಗತಿ |
| 5 | ಮೊರಾರ್ಜಿ ದೇಸಾಯಿ ಪದವಿ ಪೂರ್ವ ಬಾಲಕಿಯರ ವಸತಿ ಕಾಲೇಜುಗಳು | 21 | 11 ರಿಂದ 12ನೇ ತರಗತಿ (1ನೇ & 2ನೇ ಪಿಯುಸಿ) |

| ಕ್ರ.ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಆ. | ಸದರಿ ಶಾಲಾ ಕಾಲೇಜುಗಳಲ್ಲಿ ಇರುವ ಮೂಲಭೂತ ಸೌಲಭ್ಯಗಳ ಕೊರತೆ ಏನು; (ವಿವರಿಸುವುದು) | ಅಲ್ಪಸಂಖ್ಯಾತರ ಶಾಲಾ ಕಾಲೇಜುಗಳಲ್ಲಿ ಮೂಲಭೂತ ಸೌಕರ್ಯಗಳಾದ ಕಾಟ್, ಬೆಡ್, ಬೆಡ್‌ಶೀಟ್, ಡೆಸ್ಕ್, ಶುದ್ಧ ಕುಡಿಯುವ ನೀರು (ಆರ್.ಓ ಘಟಕ), ಅಗ್ನಿಶಾಮಕಗಳು, ನ್ಯಾಪ್‌ಕಿನ್ ಬರ್ನಿಂಗ್ ಮಷಿನ್, ಜೆರಾಕ್ಸ್ ಮಷಿನ್, ಅಲ್ಮೆರಾ, ಟೇಬಲ್, ಕುರ್ಚಿ, ರಾಕ್ಸ್, ಸೋಲಾರ್ ವಾಟರ್ ಹೀಟರ್, ಸೋಲಾರ್ ಲೈಟಿಂಗ್ಸ್, ಪಾತ್ರೆಪಳಗ ಮಾಹಿತಿ ತಂತ್ರಜ್ಞಾನ ಮೂಲಸೌಕರ್ಯಗಳಾದ ಗಣಕಯಂತ್ರ ಪ್ರಯೋಗಾಲಯ, ಡಿಜಿಟಲ್ ಕ್ಲಾಸ್, ಡಿಜಿಟಲ್ ಲೈಬ್ರರಿ, ಪ್ರಿಂಟರ್, ಸ್ಕ್ಯಾನರ್‌ಗಳ ಕೊರತೆ ಇದೆ.<br><br>2019-20ನೇ ಶೈಕ್ಷಣಿಕ ಸಾಲಿನಲ್ಲಿ ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯ ಅಧೀನದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಕೆಲವು ಶಾಲಾ ಕಾಲೇಜುಗಳಿಗೆ ಅಗತ್ಯ ಮೂಲಸೌಲಭ್ಯಗಳಾದ ಕಾಟ್, ಬೆಡ್, |

ಬೆಡ್‌ಶೀಟ್, ಶುದ್ಧ ಕುಡಿಯುವ ನೀರು (ಆರ್.ಓ ಘಟಕ), ಸೋಲಾರ್ ವಾಟರ್ ಹೀಟರ್, ಸೋಲಾರ್ ಲೈಟಿಂಗ್ಸ್, ಗ್ರಂಥಾಲಯ, ಡಿಜಿಟಲ್ ಟ್ಯಾಬ್‌ಗಳು, ವಿದ್ಯಾರ್ಥಿಗಳ ಸುರಕ್ಷತೆಗಾಗಿ ಸಿ.ಸಿ.ಟಿ.ವಿ ಕ್ಯಾಮರಗಳನ್ನು ವ್ಯವಸ್ಥೆ ಹಾಗೂ ವಸತಿ ಶಾಲೆಗಳಲ್ಲಿ ಬಯೋಮೇಟ್ರಿಕ್ ವ್ಯವಸ್ಥೆಯನ್ನು ಕಲ್ಪಿಸಲಾಗಿದೆ.

2020-21 ಶೈಕ್ಷಣಿಕ ಸಾಲಿನಲ್ಲಿ ಕೋವಿಡ್-19ನ ಕಾರಣ ಅನುದಾನದ ಕೊರತೆಯಿಂದ ಶಾಲಾ ಕಾಲೇಜುಗಳಿಗೆ ಅಗತ್ಯವಿರುವ ಎಲ್ಲಾ ಮೂಲಭೂತ ಸೌಕರ್ಯಗಳನ್ನು ಕಲ್ಪಿಸಲು ಸಾಧ್ಯವಾಗಿರುವುದಿಲ್ಲ. 2021-22ನೇ ಸಾಲಿನಲ್ಲಿ ಶಾಲಾ ಕಾಲೇಜುಗಳಿಗೆ ಅಗತ್ಯವಿರುವ ಪ್ರಯೋಗಾಲಯಗಳ ಸೌಲಭ್ಯ, ಡೆಸ್ಕ್, ಡೈನಿಂಗ್ ಟೇಬಲ್, ಬೆಡ್, ಬೇಡ್‌ಶಿಟ್, ಕಂಪ್ಯೂಟರ್ಸ್, ಪ್ರಿಂಟರ್, ಪ್ರೊಜೆಕ್ಟರ್ ಹಾಗೂ ಇಂಟರ್ನೆಟ್ ಸೇವೆಗಳನ್ನು ಕಲ್ಪಿಸುವ ಕ್ರಮ ಕೈಗೊಳ್ಳಲಾಗಿದೆ.

ಅಲ್ಲದೇ ಪ್ರತಿ ಶೈಕ್ಷಣಿಕ ವರ್ಷದಲ್ಲಿ ಪ್ರತಿ ವಿದ್ಯಾರ್ಥಿಗೆ ಅಗತ್ಯ ಲೇಖನಾ ಸಾಮಗ್ರಿ, ನೋಟ್‌ಪುಸ್ತಕ, ಸ್ಕೂಲ್ ಬ್ಯಾಗ್‌ಗಳು, ಪಠ್ಯಪುಸ್ತಕ, ಸಮವಸ್ತ್ರ, ಶೂ, ಸಾಕ್ಸ್ ಟೈ, ಬೆಲ್ಟ್ ಹಾಗೂ ಇತರೆಗಳನ್ನು ಒದಗಿಸಲಾಗುತ್ತಿದೆ.

ಪ್ರಸ್ತುತ, 2021-22ನೇ ಆರ್ಥಿಕ ಸಾಲಿನಲ್ಲಿ ಶಾಲಾ/ಕಾಲೇಜುಗಳಿಗೆ ಅಗತ್ಯವಿರುವ ಮೂಲಭೂತ ಸೌಕರ್ಯಗಳನ್ನು ಅನುದಾನದ ಲಭ್ಯತೆಗೆ ಅನುಸಾರ ಕಲ್ಪಿಸಲು ಕ್ರಮ ಕೈಗೊಳ್ಳಲಾಗುತ್ತಿದೆ.

ಇ. ಸದರಿ ಶಾಲಾ ಕಾಲೇಜುಗಳಲ್ಲಿ ಮಂಜೂರಾಗಿರುವ ಬೋಧಕ/ಬೋಧಕೇತರರ ಸಿಬ್ಬಂಧಿಗಳ ಸಂಖ್ಯೆ ಎಷ್ಟು;

ಅಲ್ಪಸಂಖ್ಯಾತರ ವಸತಿ ಶಾಲೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಬೋಧಕ/ ಬೋಧಕೇತರ ಸಿಬ್ಬಂದಿಗಳ ವಿವರ:

| ಕ್ರ. ಸಂ | ವಸತಿ ಶಾಲೆ | ಮಂಜೂರಾದ ಬೋಧಕ/ ಬೋಧಕೇತರ ಸಿಬ್ಬಂದಿಗಳ ಸಂಖ್ಯೆ |
|---|---|---|
| 1 | ಮೊರಾರ್ಜಿದೇಸಾಯಿ ವಸತಿ ಶಾಲೆ | 2207 |
| 2 | ಮೊರಾರ್ಜಿದೇಸಾಯಿ ವಸತಿ ಪದವಿ ಪೂರ್ವಕಾಲೇಜು | 399 |
| 3 | ಮಾದರಿ ವಸತಿ ಶಾಲೆ (ನವೋದಯ) | 326 |
| 4 | ಸರ್ಕಾರಿ ಮುಸ್ಲಿಂ ವಸತಿ ಶಾಲೆ | 105 |
| 5 | ಮೌಲಾನಾಆಜಾದ್ ಮಾದರಿ ಶಾಲೆ | 700 |
| | ಒಟ್ಟು | 3737 |

ಈ. ಸದರಿ ಶಾಲಾ ಕಾಲೇಜುಗಳಲ್ಲಿ ಖಾಲಿ ಇರುವ ಬೋಧಕ/ಬೋಧಕೇತರರ ಸಿಬ್ಬಂಧಿಗಳ ಸಂಖ್ಯೆ ಎಷ್ಟು;

ಅಲ್ಪಸಂಖ್ಯಾತರ ವಸತಿ ಶಾಲೆಗಳಲ್ಲಿ ಖಾಲಿ ಇರುವ ಬೋಧಕ/ ಬೋಧಕೇತರ ಸಿಬ್ಬಂದಿಗಳ ವಿವರ:

| ಕ್ರ. ಸಂ | ವಸತಿ ಶಾಲೆ | ಖಾಲಿ ಇರುವ ಬೋಧಕ/ ಬೋಧಕೇತರ ಸಿಬ್ಬಂದಿಗಳ ಸಂಖ್ಯೆ |
|---|---|---|
| 1 | ಮೊರಾರ್ಜಿದೇಸಾಯಿ ವಸತಿ ಶಾಲೆ | 1430 |
| 2 | ಮೊರಾರ್ಜಿ ದೇಸಾಯಿ ವಸತಿ ಪದವಿ ಪೂರ್ವ ಕಾಲೇಜು | 225 |
| 3 | ಮಾದರಿ ವಸತಿ ಶಾಲೆ (ನವೋದಯ) | 240 |

| | | |
|---|---|---|
| 4 | ಸರ್ಕಾರಿ ಮುಸ್ಲಿಂ ವಸತಿ ಶಾಲೆ | 41 |
| 5 | ಮೌಲಾನಾಆಜಾದ್ ಮಾದರಿ ಶಾಲೆ | 609 |
| | ಒಟ್ಟು | 2545 |

| | | |
|---|---|---|
| ಉ. | ಸದರಿ ಖಾಲಿ ಹುದ್ದೆಗಳನ್ನು ಯಾವ ಕಾಲಮಿತಿಯಲ್ಲಿ ಭರ್ತಿ ಮಾಡಲಾಗುವುದು ? | ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯ ಶಾಲಾ/ಕಾಲೇಜುಗಳಲ್ಲಿ ಖಾಲಿ ಇರುವ ಬೋಧಕ/ಬೊಧಕೇತರ ಹುದ್ದೆಗಳನ್ನು ಕರ್ನಾಟಕ ಲೋಕಸೇವಾ ಆಯೋಗದ ಮುಖಾಂತರ ನೇರ ನೇಮಕಾತಿ ಮೂಲಕ ಭರ್ತಿ ಮಾಡಲಾಗುತ್ತಿದ್ದು, ನೇಮಕಾತಿಪ್ರಕ್ರಿಯೆಯು ಪ್ರಗತಿಯಲ್ಲಿರುತ್ತದೆ. ಸದರಿ ಹುದ್ದೆಗಳನ್ನು 2022-23ನೇ ಸಾಲಿನಲ್ಲಿ ಭರ್ತಿ ಮಾಡಲಾಗುವುದು. ಪ್ರಸ್ತುತ ಖಾಲಿ ಇರುವ ಬೋಧಕ ಹುದ್ದೆಗಳಿಗೆ ಅತಿಥಿಉಪನ್ಯಾಸಕರು/ಶಿಕ್ಷಕರನ್ನು ನೇಮಿಸಲಾಗಿರುತ್ತದೆ. |

ಸಂಖ್ಯೆ: **MWD 15 LMQ 2022**

(ಬಸವರಾಜ ಬೊಮ್ಮಾಯಿ)
ಮುಖ್ಯಮಂತ್ರಿ